# ಕಾನನ

ನಿಸರ್ಗದೆಡೆಗೆ ಪಯಣ

JUNE 2011



ಲೇಖನಗಳು




ಅನಿಸಿಕೆಗೆ

E-mail: kaanana.mag@gmail.com


ಮುಖಪುಟ: ರೆಡ್‌ಪೈರೆಟ್




# ಸಂಪಾದಕೀಯ

ಪ್ರಿಯ ಓದುಗರೇ. . . .

ಕಳೆದ ಸಂಚಿಕೆಯಂತೆಯೇ ಈ ಸಂಚಿಕೆಯಲ್ಲಿ *ನಾಗೇಶ್*ರವರು ಹಕ್ಕಿಲೋಕದಲ್ಲಿ ಮಿಂಚುಳ್ಳಿ ಎಂಬ ಒಂದು ಸುಂದರವಾದ ಹಕ್ಕಿಯನ್ನು ಕಂಡ ಹುಡುಗರು, ಅವುಗಳು ನಮ್ಮ ಬಳಿಯಲ್ಲೇ ಇದ್ದರೆ ಎಷ್ಟು ಚೆಂದವೆಂದು, ಅವುಗಳನ್ನು ಹಿಡಿಯಲು ಪಡುವ ಪಾಡಿನ ಬಗ್ಗೆ, ಕೊನೆಗೆ ಅವುಗಳು ಅವರಿಂದ ದೂರವಾದಾಗ ಪಡುವ ನೋವನ್ನು ಮತ್ತು ಅವುಗಳ ಜೀವನಶೈಲಿಯನ್ನು ಕಥೆಯ ಮುಖಾಂತರ ಸುಂದರವಾಗಿ ನಿಮ್ಮ ಮುಂದೆ ಇಟ್ಟಿದ್ದಾರೆ.

*ಹೋ. .ಹೋ. .*
*ಓಹೋ. . .ಅದ್ದದ್ದದ್ದದ್ದೋ ಹೋ. . .*
*ಹೋ. .ಹೋ. .*

ಮಾನವ ಪಶುಸಾಕಾಣಿಕೆ ಕಲಿತಾಗಿನಿಂದಲು ಕಾಡುಪ್ರಾಣಿಗಳಿಂದ ತನ್ನ ದನಕರು ಕುರಿಮರಿಗಳನ್ನು ರಕ್ಷಿಸಿಕೊಂಡು ಬಂದಿದ್ದಾನೆ. ಈ ರೀತಿ ಮಾಡುವಾಗ ಮಾನವ ಮತ್ತು ಕಾಡುಪ್ರಾಣಿಗಳ ನಡುವೇ ಹೋರಾಟ ಸಾಮಾನ್ಯ.

ಕಾಡಿನ ಮಗ್ಗುಲಲ್ಲಿ ಬದುಕಿರುವ ಮಾರ ತನ್ನ ಇಂತಹದೇ ಹೋರಾಟದಲ್ಲಿ ಸೋತ ಹಾಗು ಕಾಡುನಾಯಿಗಳನ್ನು ಸೋಲಿಸಿದ ವಿಷಯವಾಗಿ *ಅಶ್ವತ್*ರವರು ಹಳ್ಳಿಯಲ್ಲಿನ ಜನರ ಜೀವನವನ್ನು ಮತ್ತು ಜನರ ಹಾಗು ಕಾಡುಪ್ರಾಣಿಗಳ ನಡುವಿನ ಘರ್ಷಣೆಯನ್ನು 'ಈರಿಯ ಮಾರ' ಎಂಬ ಲೇಖನದಲ್ಲಿ "ಸುಡುವ ಬಿಸಿಲಿನಲ್ಲಿ ಸತ್ತ ಬಿಳಿಕುರಿಗಳು ಕೆಂಪಗಾಗಿ ಕಾಣುತ್ತಿದ್ದವು" ಎಂದು ನಯವಾಗಿ ಬಣ್ಣಿಸಿದ್ದಾರೆ.

ಪ್ರಕೃತಿಯ ಬಗ್ಗೆ ಅರಿವು ಮೂಡಿಸುವ ನಮ್ಮ ಪುಟ್ಟ ಪತ್ರಿಕೆಯನ್ನು ಓದಿ ಸಲಹೆ ಸೂಚನೆಯನ್ನು ನಿಮ್ಮಿಂದ ಆಶಿಸುತ್ತೆವೆ. ಮತ್ತು ಈ ಪತ್ರಿಕೆಯು ನಿಮಗಾಗಿಯೇ ಇದೆ, ವನ್ಯಲೋಕ, ಕಾಡು, ಪ್ರಾಣಿ-ಪಕ್ಷಿಗಳು, ಮತ್ತು ಸಾಹಿತ್ಯ ವಿಚಾರಗಳು, ಕವನ, ಕಥೆಗಳು, ವಿಜ್ಞಾನ, ಪ್ರವಾಸ, ಛಾಯಾಚಿತ್ರಗಳು ಮುಂತಾದ ವಿಷಯಗಳನ್ನು ಲೇಖನಗಳ ಮೂಲಕ ಈ ಜಗತ್ತಿಗೆ ಸಾದರಪಡಿಸಬಹುದು. ಲೇಖನಗಳನ್ನು ಕಳುಹಿಸಬಹುದಾದ ಇ-ಮೇಲ್ ವಿಳಾಸ: kaanana.mag@gmail.com ಗೆ ಕಳುಹಿಸಿ.



# ಹಕ್ಕಿಲೋಕ

## ಮಿಂಚುಳ್ಳಿ

ವೈಜ್ಞಾನಿಕ ಹೆಸರು: *Halcyon smyrnensis*
ಇಂಗ್ಲೀಷ್ ಹೆಸರು: **White-throated Kingfisher**

ಸೂರ್ಯನು ಮುಳುಗುವ ಹೊತ್ತಿನಲ್ಲಿ "ಕಿಕ್ಕಿಕ್ಕಿ. . .ಕ್ಕೀ" ಎಂದು ಯಾವುದೋ ಪಕ್ಷಿ ನಿಸರ್ಗಕ್ಕೆ ಕೂಗಿ ಹೇಳುತ್ತಿತ್ತು. ಆಗ ತಾನೆ ಹಸುಗಳನ್ನು ಕಾಡಿನಿಂದ ಮನೆಗೆ ಹೊಡೆತಂದು ಕೂಡಿ ಕತ್ತಲಾಗಲು ಸ್ವಲ್ಪವೇ ಸಮಯವಿದ್ದುದ್ದರಿಂದ ನಾನು ಮತ್ತು ನನ್ನ ಗೆಳೆಯ ಸುಭಾನ್ ಸಾಬಿಯು ಊರಾಚೆ ಇರುವ ಒಡೆಯನಕೆರೆಯ ದಂಡೆಯ ಬಳಿ ಸಾಗುವಾಗ ಆ ಹಕ್ಕಿಯ ಕೂಗು ನಮ್ಮನ್ನು ಸೆಳೆಯಿತು. ಕಾಡುಹಕ್ಕಿ-ಬಾಡಿನ ರುಚಿ ಕಂಡಿದ್ದ ಸಾಬಿಗೆ ಈ ಹಿರಿದಾಗಿ ಕೂಗುತ್ತಿದ್ದ ಹಕ್ಕಿಯು ಕೂಡ ದಪ್ಪವಾಗಿರಬೇಕು ಹೇಗಾದರೂ ಮಾಡಿ ಹಿಡಿದರೆ ಒಳ್ಳೆ ರುಚಿಯಾದ ಬಾಡು ಗ್ಯಾರಂಟಿ ಎಂದು ಏರಿಯ ಕಡೆಗೆ ಓಡಿದ. ನಮ್ಮ ಬರವನ್ನು ಅರಿತ ಹಕ್ಕಿ ರೆಕ್ಕೆ ಬಿಚ್ಚಿ ಪುರ್ರನೆ ಹಾರಿತು. ಮುಸ್ಸಂಜೆಯ ಬೆಳಕಿಗೆ ಪಳ್ಳನೆ ಹೊಳೆದ ಅದರ ನೀಲಿಯಾದ ರೆಕ್ಕೆಗಳನ್ನು ಕಂಡು ವಿಸ್ಮಿತರಾಗಿ ಕದಲದೆ ಮೌನವಾಗಿ ನಿಂತೆವು.

"ಲೋ.. ನೋಡ್ದ ಅದರ ರೆಕ್ಕೆ ಬಣ್ಣಾನಾ?
ಎಷ್ಟು ಚೆನ್ನಾಗಿದೆ!"

ನೀರಿಗೆ ಬಾಗಿದ್ದ ಹತ್ತಿಮರದ ಕೊಂಬೆಯ ಮೇಲೆ ಕುಳಿತಿದ್ದ ಹಕ್ಕಿ ಬುಡುಕ್ಕನೆ ನೀರಿಗೆ ದುಮುಕಿತು. ಕ್ಷಣಾರ್ಧದಲ್ಲಿ ಕೊಕ್ಕಿನಲ್ಲಿ ಮೀನನ್ನು ಹಿಡಿದು ಹಾರಿ ದೂರದಲ್ಲಿದ್ದ ಕೆರೆಯ ದಿಬ್ಬದಲ್ಲಿ ಕಣ್ಮರೆಯಾಯಿತು. ಅಲ್ಲಿಗೆ ಹೋಗಿ ನೋಡಿದರೆ ಹಲವು ಬಿಲಗಳು ಕಂಡವು ಈ ಹಕ್ಕಿಯೂ ಕೂಡ ಈ ಬಿಲದಲ್ಲಿ ಮರಿ ಮಾಡಿದೆ ಕಾಣೊ. ಅದು ಮರಿಗಳಿಗೆ ತಿನ್ನಿಸಲು ಮೀನ್ ಎತ್ಕೊಂಡು ಬಂದಿದ್ದು, ಹೇಗಾದರೂ ಮಾಡಿ ತಾಯಿಹಕ್ಕಿ ಮತ್ತು ಮರಿಗಳನ್ನು ಹಿಡಿಯಲೇಬೇಕೆಂದು ತೀರ್ಮಾನಿಸಿ ಸರಸರನೆ ತನ್ನ ಪ್ಯಾಂಟನ್ನು ಮಂಡಿಯವರೆಗೂ ಮಡಚಿ ನೀರಿಗೆ ಇಳಿದ. ಗೂಡಿನಬಿಲ ನಮಗೆ ಎಟಕದಂತೆ ಮೂರ್ನಾಲ್ಕು ಅಡಿ ಎತ್ತರದಲ್ಲಿತ್ತು.

ಈಗಾಗಲೆ ಸೂರ್ಯ ಮುಳುಗಿ ಕತ್ತಲಾಗುತ್ತಿದ್ದರಿಂದ ಆಕಾಶವೆಲ್ಲ ಕೆಂಪಗೆ ಕಾಣುತ್ತಿತ್ತು. ಹಕ್ಕಿಮರಿಗಳನ್ನು ಹೇಗಾದರೂ ಮಾಡಿ ಹಿಡಿಯಲೇ ಬೇಕು ಎಂದು "ಲೋ.. ಸಾಬಿ ನಾನು ಕೆಳಗೆ ನಿಂತ್ಕೊತೀನಿ ನನ್ನ ಬುಜದ ಮೇಲೆ ಏರಿ ಮರಿಗಳನ್ನು ಹಿಡ್ಕೊಡು" ಎಂದು ಮೆಲುದನಿಯಲ್ಲಿ ಹೇಳಿ ದಿಬ್ಬಕ್ಕೆ ಒರಗಿನಿಂತೆ, ನನಗಿಂತ ಸ್ವಲ್ಪ ಸಣ್ಣಗಿದ್ದ ಸಾಬಿ ಚಕಚಕನೆ ಕ್ಷಣಾರ್ಧದಲ್ಲಿ ನನ್ನ ಮೇಲೆ ಏರಿ ನಿಂತ. ಗೂಡಿನ ಬಳಿ ಹಿಡಿದುಕೊಳ್ಳಲು ಏನು ಆಧಾರ ಸಿಗದಿದ್ದರಿಂದ ಅಲುಗಾಡ ತೊಡಗಿದ ಅಷ್ಟರಲ್ಲಿ ತಾಯಿಹಕ್ಕಿ ಗೂಡಿನಿಂದ ಹಾರಿ ಬಂದು ಸಾಬಿಯ ಮುಖಕ್ಕೆ ಕುಕ್ಕಿತು.

"ಲೋ.. ಲೋ.." ಎಂದು ಸಾಬಿ ಅಲುಗಾಡಿದ್ದರಿಂದ ಇಬ್ಬರೂ ನೀರಿಗೆ ದೊಪ್ಪನೆ ಬಿದ್ದೆವು.
"ತೂ.. ಇಸ್ಕಿ ಮಾಕಿ ಕಳ್ಳನನ್‌ಮಗನ್ದು ನಾನು ಗೂಡಿಗೆ ಕೈ ಹಾಕೊ ಅಷ್ಟ್ರಲ್ಲಿ ಮುಖಕ್ಕೆ ಕಚ್‌ಬುಡ್ತು ನನ್ ಮಗಂದು."
"ನಡಯಲೋ...
ಹಕ್ಕಿನೂಬ್ಯಾಡ... ಗಿಕ್ಕಿನೂಬ್ಯಾಡ... "

ಎಂದು ಕೋಪದಿಂದ ಕೂಗಾಡಿದ. ಸಾಬಿಗೆ ನಾನು ನನ್ನ ನೆನೆದ ಬಟ್ಟೆಗಳನ್ನು ತೋರಿಸಿ ನಮಗೆ ಈ ಗತಿ ತಂದಿಟ್ಟ ತಾಯಿಹಕ್ಕಿಯ ಮೇಲೆ ಕೋಪ ಬಂದು, ಇದನ್ನು ಸುಮ್ಮನೆ ಬಿಡಬಾರದೆಂದು, ಹಕ್ಕಿಮರಿ ಹಿಡಿಯಲೇಬೇಕೆಂಬ ಆಕಾಂಕ್ಷೆ ಮತ್ತಷ್ಟು ಪ್ರಬಲವಾಯಿತು.

"ಲೋ.. ಸಾಬಿ ಸೋದ ಕಾಣೊ ನೀನು. ಹೇಗಿದ್ರು ಇಬ್ರು ನೆನ್ದಿದ್ದೀವಿ ಈ ಬಾರಿ ನಾನು ಪ್ರಯತ್ನಿಸುತ್ತೇನೆ" ಎಂದು ಸಾಭಿಯ ಬುಜದ ಮೇಲೆ ಏರಿ ನಿಂತು ಗೂಡಿನ ಬಳಿ ಮುಖವಿಕ್ಕಿದ್ದೇ ತಡ ಯಾವುದೋ ಒಂದು ಬಗೆಯ ದುರ್ವಾಸನೆ ಮುಖಕ್ಕೆ ರಾಚಿತು. ಗೂಡಿನೊಳಗೆ ಕೈ ಹಾಕಿದಾಗ ಸುಮಾರು ೨ ಅಡಿ ಒಳಗೆ ಕೈಗೆ ಮೃದುವಾಗಿ ಮರಿಗಳು ಸಿಕ್ಕವು. ಅವು ನನ್ನ ಕೈಯನ್ನು ಕುಕ್ಕತೊಡಗಿದವು. ಪುಕ್ಕಬಲಿತ ನೀಲಿಯ ಹುಂಡೆಗಳಂತೆ ಕಾಣುತ್ತಿದ್ದ ಐದು ಮರಿಗಳನ್ನು ಒಂದೊಂದಾಗಿ ನನ್ನ ಕಾಲ ಕೆಳಗೆ ನಿಂತಿದ್ದ ಸಾಬಿಯ ಕೈಗೆ ಹಿಡಿದುಕೊಟ್ಟೆ. ಅವನು ಇನ್‌ಶರ್ಟ್ ಮಾಡಿದ್ದ ಶರ್ಟಿನೊಳಕ್ಕೆ ಬಿಟ್ಟಕೊಂಡ. ಬುರುದೇ ನೀರಿನಲ್ಲಿ ಬಿದ್ದು ಮುಖಮೂತಿಯೆಲ್ಲಾ ಕೆಸರಾಗಿದ್ದರಿಂದ ನಮ್ಮನ್ನು ನೋಡಿದರೆ ನಮಗೆ ನಗು ಬರುತ್ತಿತ್ತು. ಹಕ್ಕಿ ಹಿಡಿದ ಸಂತಸದಲ್ಲಿ, ನಿಸರ್ಗಕೊಟ್ಟ ಸವಾಲಿಗೆ ಮಣಿಯದೆ ಅದನ್ನು ಗೆದ್ದ ಬಾಲಖುಷಿಯಿಂದ ಅವುಗಳನ್ನು ಸಾಕುವುದು ಹೇಗೆ ಎಂಬುದರ ಬಗ್ಗೆ ಯೋಚಿಸುತ್ತ, ಬೇಗ ಬೇಗ ಮನೆಯ ಕಡೆ ನಡೆದವು. ಸಾಬಿ ಮನೆಯಿಂದ ಕಬ್ಬಿಣದಿಂದ ಮಾಡಿದ ಮುಚ್ಚಳವಿರುವ ಈರುಳ್ಳಿ ತುಂಬುವ ಬುಟ್ಟಿಯನ್ನು ತಂದು ಅದರಲ್ಲಿ ಮರಿಗಳನ್ನು ಬಿಟ್ಟ. ಕೆಸರುಮಯವಾದ ನಮ್ಮಿಬ್ಬರ ವೇಷವನ್ನು ಕಂಡ ನಮ್ಮ ಅಮ್ಮಂದಿರು ಸರಿಯಾಗಿಯೇ ಉಗಿದರು. ನಮಗೋ ಹಕ್ಕಿ ಮರಿಯದೇ ಚಿಂತೆ ಅವು ಏನು ತಿನ್ನುತ್ತವೆ ಏನ್ನುವುದೇ ನಮ್ಮ ಮೊದಲನೇ ಸಮಸ್ಯೆ?.. ಅನ್ನ ಹಾಕಿದರೇ ಮೂಸಿ ಕೂಡ ನೋಡವು, ಬಯಲಿನಲ್ಲಿ ಜಿಗಿಯುವ ಮಿಡತೆಗಳನ್ನು ಹರಸಾಹಸ ಮಾಡಿ ಹಿಡಿದು ತಂದು ಕೊಟ್ಟೆವು. ಏನು ಪ್ರಯೋಜನವಿಲ್ಲ!

ಸಾಬಿ ತನ್ನ ತಾತನ ಕಾಲದ ಬಿದಿರು ಕೋಲಿನ ಗಾಳವನ್ನು ತಂದು ಮೀನು ಹಿಡಿದು ತಿನ್ನಿಸಿ ಇವುಗಳನ್ನು ಬದುಕಿಸಿ ಸಾಕುತ್ತೇನೆ ಎಂದ, ತೆಂಗಿನ ಚಿಪ್ಪಿನ ತುಂಬಾ ಎರೆ ಹುಳುಗಳನ್ನು ಹಿಡಿದು ತಂದ. ಕೆರೆಗೆ ಹೋಗಿ ಕಿರುಬೆರಳು ಗಾತ್ರದ ೩-೪ ಮೀನುಗಳನ್ನು ಹಿಡಿದ ಮೇಲೆ 'ಅವು ನೆನ್ನೇಯಿಂದ ಊಟಮಾಡಿಲ್ಲ ಈ ಮೀನನ್ನು ಅವಕ್ಕೆ ಕೊಟ್ಟು ಆಮೇಲೆ ಮತ್ತೆ ಬರೋಣ ಎಂದು ಓಡೋಡಿ ಬಂದೆವು. ಹೋಗಿ ಮನೆಯಲ್ಲಿ ನೋಡಿದರೆ ನಮಗಾದ ದುಃಖ ಹೇಳತೀರದು. ಬುಟ್ಟಿಯಲ್ಲಿ ಹಕ್ಕಿಗಳಿಲ್ಲ!.



ಹಕ್ಕಿಗಳಿಗಾಗಿ ಸಾಬಿ ಮನೆಯೆಲ್ಲಾ ಹುಡುಕಾಡಿದ. ಅವರ ಅಮ್ಮನನ್ನು ಕೇಳಿದಾಗ "ನಿನ್ನ ತಮ್ಮ ಮತ್ತು ಗೆಳೆಯರು ಅವ್ನ ಹಿಡ್ಕೊಳಕ್ಕೆ ಬುಟ್ಟಿಯ ಮುಚ್ಚುಳ ತೆಗೆದ್ರು ಅವು ಒಂದೊಂದೆ ಚಲಾಗಯಾ" ಎಂದು ಉರ್ದುವಿನಲ್ಲಿ ಹೇಳಿದಳು. ಸುಭಾನ್ ಸಾಬಿಗೆ ಕೋಪ ಬಂದು, ಮೀನು ಶಿಕಾರಿಯ ಗಾಳವನ್ನೂ, ಶಿಕಾರಿ ಮಾಡಿದ ಪುಡಿಮೀನನ್ನು ಎಸೆದು ತಮ್ಮನನ್ನು ಹುಡುಕ ತೊಡಗಿದ.

ಬುಟ್ಟಿಯಿಂದ ನೀಲಾಕಾಶಕ್ಕೆ ಹಾರಿಹೋದ ತನ್ನ ನೀಲಿಹಕ್ಕಿಗಳಿಗಾಗಿ ಅಳುತ್ತಾ ಕುಳಿತ. ನಾನು ಅವನಿಗೆ ಸಮಾಧಾನ ಮಾಡಿ ಮನೆಗೆ ಬರುವಾಗ ಕರೆಂಟ್ ಲೈನ್ ತಂತಿಯ ಮೇಲೆ ಕುಳಿತ ತಾಯಿಮಿಂಚುಳ್ಳಿಹಕ್ಕಿ ನನ್ನನ್ನೇ ನೋಡುತ್ತಿರುವಂತೆ ಅನ್ನಿಸಿತು.

ಮಿಂಚುಳ್ಳಿಹಕ್ಕಿ ನಮ್ಮನಾಡಿನಲ್ಲಿ ಸಾಮಾನ್ಯವಾಗಿ ಕಾಣಸಿಗುವ ಸುಂದರವಾದ ಪಕ್ಷಿ. ಇದು ನೀರಿರುವ ಜಾಗಗಳಲ್ಲಿ ಗದ್ದೆಗಳಲ್ಲಿ, ಬಯಲುಗಳಲ್ಲಿ ಕಾಣಸಿಗುತ್ತದೆ. ಕಡಿದಾದ ಮಣ್ಣಿನ ದಿಬ್ಬಗಳಲ್ಲಿ ಎರಡು ಮೂರು ಅಡಿ ಬಿಲಕೊರೆದು ಗೂಡು ಮಾಡಿ ಐದಾರು ಮೊಟ್ಟೆ ಇಟ್ಟು, ಗಂಡು ಮತ್ತು ಹೆಣ್ಣು ಎರಡೂ ಸೇರಿ ಇಪ್ಪತ್ತೊಂದು ದಿನಗಳ ತನಕ ಕಾವುಕೊಟ್ಟು, ಮರಿಮಾಡಿ, ಗುಟುಕು ನೀಡಿ ಸಾಕಿ ಸಲಹುತ್ತವೆ.





# ಈರಿಯ ಮಾರ

-ಕಾಡುನಾಯಿಯ ಕುರಿಬೇಟೆ

ಜುಬ್ರುತಲೆ, ಎಣ್ಣೆಗೋಧಿ ಮೈಬಣ್ಣ, ತುಟ್ಟಿಗಳನ್ನು ಮುಚ್ಚಲು ಎಷ್ಟೇ ಪ್ರಯತ್ನ ಪಟ್ಟರೂ ಎರಡು ಹಲ್ಲುಗಳು ಮಾತ್ರ ಹೊರಗಡೆನೇ ಇದ್ದು, ಸದಾ ನಗ್ತಿರ್ತವೆ, ಎಲೆ ಅಡಿಕೆ ಹಾಕೀಹಾಕಿ. . . .ಹಲ್ಲುಗಳೆಲ್ಲ ಕರ್‍ರಗಾಗಿ ಮಾಸಲು ಬಣ್ಣದಲ್ಲಿ ಹೊಳೆಯುತ್ತಿರುವ ಈರಿಯ ಗಂಡನೇ ಮಾರ ಅಂಥ.

ಮಾರನು ಕೂಡ ಅದೇ ವರಸೆಗೆ ಸೇದೋರ್ನು, ಸದಾ ಮಾಸಲು ಬಟ್ಟೆ, ಯಾವಗ್ಲೂ ನಗುಮುಖ, ಬೇಸಾಯದ ಜೋತೆಲೇ ದನ–ಕುರಿ ಅಂತ ಇಪ್ಪತ್ತಾರು ಕಸುಬುಗಳನ್ನ ವರ್ಷಒಂಬ್ಬತ್ತು ಕಾಲನ್ನು ಮಾಡುತ್ತಾ ಇರ್ತನೆ. ಇನ್ನೂ ನಾಲ್ಕು ಜನ ಮಕ್ಕಳು ಬೇರೇ, ಎರಡು ಹೆಣ್ಣು, ಎರಡು ಗಂಡು, ಹೆಣ್ಮಕ್ಕಳಿಗೆ ಮದ್ವೆಎಲ್ಲಾ ಮಾಡಿದ್ದಾನೆ. ಗಂಡ್ಮಕ್ಕಳೂ. . . . . ಒಬ್ಬ ಬಿ.ಕಾಂ ಮಾಡ್ತಿದ್ದ, ಇನ್ನೊಬ್ಬ ದೊಡ್ಡವ ಹತ್ತನೇ ಕ್ಲಾಸ್ ಫೇಲಾಗಿ ಕಾರ್ಪೆಂಟ್ರು ಕೆಲಸ ಕಲಿಬೇಕೆಂದು ಬೆಂಗಳೂರಿನ ಸಂಬಂಧಿಕರ ಮನೆಯಲ್ಲಿ ಕೆಲಸ ಮಾಡುತ್ತಿದ್ದ.



ಬೇಸಿಗೆಯ ಒಂದು ದಿನ ವಿಪರೀತವಾದ ಬಿಸಿಲು, ಬಿಸಿಗಾಳಿ ಭೂಮಿಯಿಂದ ಆಕಾಶದ ಕಡೆಗೆ ಹಾವಿಯಾಗುತ್ತಿತ್ತು, ಒಂದೆರಡು ಸಾರಿ ಮಳೆಯಾದರು ಬಿಸಿಲ ತಾಪವೇನು ಕಡಿಮೆಯಾಗಿರಲ್ಲಿಲ್ಲ, ಮಾರ ಬಿಸಿಲಲ್ಲೇ ಕುಳಿತು ಕುರಿಗಳನ್ನು ಮೆಯಿಸುತ್ತಿದ್ದ.

“ಥುತ್‍ತೇರಿ ! ಇದೇನು ಬಿಸಿಲು ಮಾರಾಯಾ, ಮಳೆಯಿಲ್ಲ ಗಾಳಿಯಿಲ್ಲ, ಒಂದು ಎಲೆಕೂಡ ಆಲುಗಾಡ್ತಿಲ್ಲ. . .! ಎಂದು

ನೆಟ್ಟಗೆ ಮರದ ಬಳಿಗೆ ಹೊರಟ, ನಾನು ಅದೇ ಸಮಯಕ್ಕೆ ಅಲ್ಲಿಗೆ ಹೋದೆ.

ಮಾರನು "ಹೋ. . . ಬಾ ಅಸ್ವಥೋ" ಎಂದ

"ಏನ್ ಮಾರಣ್ಣ ಸಮಾಚಾರ ಊಟ ಆಯ್ತು? ಎಂದು ಸಮಾಚಾರವನ್ನು ಕೇಳುತ್ತಿರಬೇಕಾದರೆ ಮಾರನ ಕುರಿಗಳು ತಲೆಯನ್ನು ತಗ್ಗಿಸಿ ಗರಿಕೆಯ ಚಿಗುರನ್ನು ಬಿಡಿಬಿಡಿಸಿ ಮೇಯುತ್ತಿದ್ದವು, ನಾವು ಮರದ ನೆರಳಿನಲ್ಲಿ ಕುಳಿತು ಮಾತನಾಡಲು ಶುರು ಮಾಡಿ ಅರ್ಧ ತಾಸಾದರು ನಮ್ಮ ಗಮನ ಬೇರೆಲ್ಲಿಯೂ ಇರಲಿಲ್ಲ.

ಮಾರ ತನ್ನ ಮಕ್ಕಳ ವಿಚಾರವಾಗಿ 'ನನ್ನ ಚಿಕ್ಕಮಗ ಬಿ.ಕಾಂ ಮಾಡ್ತಾ ಅವನೆ ಬಿಡಪ್ಪೋ ಎಂಗೋ ಆಯ್ತದೆ, ಇನ್ನೂ ಇವುಂದೇ ಇರೋದು, ಕಾರ್ಪೆಂಟ್ರು ಕೆಲಸ ಕಲಿತಾಅವನೆ, ದೊಡ್ಡೊಂದೆ ದೊಡ್ಡ ಚಿಂತೆ ಆಗೋಗದೆ' ಎಂದು ಹೇಳುತ್ತಾ ಕುಳಿತ.

ನನಗೆ ಹಾಗೆ ಕನಸ್ಸಿನಲ್ಲಿ ಬಂದಹಾಗೆ ಭ್ರಮೆಯೋ ನಿಜವೋ. . ತಿಳಿಯದು,

ಕುರಿಗಳೆಲ್ಲ ಮೆಯುತ್ತಿರಬೇಕಾದರೆ ಮೂರ್ನಾಲ್ಕು ಕಾಡುನಾಯಿಗಳು ಬಂದ ಹಾಗೇ. .

ನಾವಿಬ್ಬರು ಮಾತಿನಲ್ಲಿಯೇ ತಲ್ಲೀನರಾಗಿದ್ದು, ಕಣ್ಮುಂದೆಯೇ ನಡೆಯುತ್ತಿರುವ ಘಟನೆ, ಕಾಡುನಾಯಿಗಳು ಬಂದು ಒಂದೊಂದೆ ಕುರಿಗಳನ್ನು ಕಚ್ಚಿಕಚ್ಚಿ ಉರುಳಿಸುವ ಹಾಗೆ, ಕುರಿಗಳೆಲ್ಲ ಗಾಬರಿಗೊಂಡು ಚಲ್ಲಪಿಲ್ಲಿಯಾಗಿ ಹೊಡುತ್ತಿರುವ ಹಾಗೆ, ಇಷ್ಟೇಲ್ಲ ನಡೆಯುತ್ತಿದ್ದರು ಕೂಡ ಮಾರನು ಮಕ್ಕಳ ಜೀವನದ ಕತೆಯಲ್ಲಿ ಮುಳಗಿಹೋಗಿದ್ದ. ನಾನು ಕೇಳುತ್ತಾ ಎನೋ ಒಂದು ಗುಂಗಿನಲ್ಲಿ ಕನಸ್ಸು ಕಾಣುತ್ತಿದೆ.

ನನ್ನ ಕಣ್ಣುಗಳು ಕ್ಯಾಮರದಂತೆ ನಮ್ಮ ಬಳಿಯಲ್ಲಿಯೇ ಇರುವ ಯಾವೂದೋ ವಸ್ತುವಿಗೆ ಫೋಕಸ್ ಆಗಿಹೋಗಿತ್ತು, ಕತೆಕೇಳುತ್ತ ಎಷ್ಟೊ ಸಮಯದ ನಂತರ ದೂರ ವಸ್ತುಗಳಿಗೆ ಫೋಕಸ್ ಮಾಡಿದಾಗಲೇ ಕುರಿಗಳ ಮೇಲೆ ಕಾಡುನಾಯಿಗಳ ದಾಳಿಯ ಕನಸ್ಸು ನಿಜವಾಗಿತ್ತು, ನಾಲ್ಕೈದು ಕುರಿಗಳು ನೆಲದ ಮೇಲೆ ಸತ್ತುಬಿದ್ದಿದ್ದು, ಉಳಿದ ಕುರಿಗಳನ್ನು ಕಾಡುನಾಯಿಗಳು ಛೇಸ್ ಮಾಡುತ್ತಿದ್ದವು.

ಆ ಸುಡುವ ಬಿಸಿಲಿನಲ್ಲಿ ಸತ್ತ ಬಿಳಿಕುರಿಗಳು ಕೆಂಪಗಾಗಿ ಕಾಣುತ್ತಿದ್ದವು,

"ಏ ಮಾರ ಅಲ್ನೋಡೋ!!. . . . ಅಲ್ನೋಡು. . . ನಾಯಿಗಳು!" ಎಂದು ಕೂಗಿಕೊಂಡದ್ದೆ ತಡ,

ಏನ್ಮಾರಾಯ! ಏನ್ಮಾರಾಯ ಕುರಿಗಳೆಲ್ಲ ಹಾಳಗೊದ್ವು. . . .! ಎಂದು ಚಂಗನೆ ಎಗರಿ

ಹೋ. .ಹೋ. .

ಓಹೋ. . .ಅದ್ದದ್ದದ್ದದ್ದೋ ಹೋ. . .

ಹೋ. .ಹೋ. .

ಎಂದು ದೊಂಬಿ ಎಬ್ಬಿಸಿ ಮಾರ ಮಿಂಚಿನ ವೇಗದಲ್ಲಿ ಕಾಡುನಾಯಿಗಳಿಗೆ ಕಾಡು ದಾರಿಯನ್ನು ಮುಟ್ಟಿಸಿದ, ನಾನು ಹಿಂಬಲಿಸಿದೆ. ನಾಲ್ಕೈದು ಕುರಿಗಳು ಸತ್ತು ಬಿದ್ದಿದ್ದವು. ಮಾರನು ಏನ್ಮಾರಾಯ ಎಲ್ಲಾದ್ರು ಒಂದ್ ಹದಿನೈದು ಸಾವ್ರ ರೂಪಾಯ್ ಬಳೋ ಕುರಿಗಳು ಎಂದು ಗೋಳಾಡತೊಡಗಿದ.

ಇನ್ನು ಮನೇಲಿ ಎಷ್ಟು ಬಯ್ಸಿಕೋ ಬೇಕೋ ಏನೋ. .. . .! ಎಂದು.

ತನ್ನನ್ನು ಇಲ್ಲೇ ನೋಡ್ಕೋ ಬರ್ತಿನಿ ಎಂದು ಹೇಳಿ ಮನೆ ಕಡೆಗೆ ಹೊರಟ, ಅರ್ಧ ತಾಸಿನ ನಂತರ ತನ್ನ ಜೋತೆಯಲ್ಲಿ ಹತ್ತನೆರಡು ಜನಗಳನ್ನು ಕರೆತರುವುದನ್ನು ದೂರಕ್ಕೆ ಕಂಡಿತು. ಅವರಲ್ಲಿ ಒಬ್ಬ ಹೆಣ್ಣುಹೆಂಗಸು ಬರುತ್ತಿದ್ದಳು, ಅದು ಈರಿಯೇ ಇರಬೇಕು ಎಂದುಕೊಂಡೆ. ದೂರದಿಂದಲೇ ಈರಿಯ ಬೈಗುಳದ ಸದ್ದು ಕೇಳಿಸುತ್ತಿತ್ತು.

'ಇವ್ನ ಮನೆ ಹಾಳಾಗ'

'ಥೂ! ನಿನ್ನ ಕಣ್ಣು ಇಂಗಿಹೋಗ'

ಕಾಣಕಿಲ್ವಾ ನಿನ್ನ್ ಕಣ್ಣು. . . .! ನಾಲ್ಕೈದು ಕುರಿ ಬಿದ್ದೊದಂಗೆ ಕಣ್ತಾವೆ. . .! ಎಂದು ಗಂಡನಿಗೆ ಉಗಿದು ಕುರಿಗಳ ಬಳಿಬಂದ್ಲು.



ಇನ್ನೂ ಎಲ್ಲಿ ನನ್ನನು ಸೇರಿಸಿ ಬೈದಾಳು ಎಂದು ಸ್ವಲ್ಪ ದೂರದಲ್ಲೇ ನಿಂತೆ. ತನ್ನ ಜೊತೆ ಹಿಂಬಾಲಿಸಿ ಬಂದ ಜನಗಳಿಗೆ ನನ್ನನ್ನೂ ತೋರಿಸುತ್ತಾ, ಇಲ್ಲಿ ನೋಡ್ರೋಪ್ಪೋ. .. . .!
ಇವ್ನಗೆ ಹೇಳೋರ್ ಕೇಳೋರ್ ಯಾರು ಇಲ್ವ. . . !
ಅನ್ಯಾಯವಾಗಿ ಐದು ಕುರಿ ನೋಡ್ರಿ... ..
ಅದೇನ್ ಮಾಡ್ತಿಯೋ ಮಾಡು. . . ಎಂದು ತನ್ನ ಗಂಡನ ಮುಖವನ್ನು ನೋಡಿ,
'ಥೂ ನಿನ್ನ ಬಾಯಿಗೆ ಮಣ್ಣಾಕ. . .
ನಿನ್ ಕೈಗೆ ಕುರಿಗಳನ್ನ ಕೊಟ್ರೆ ಮನೆ ಹಾಳ್ ಮಾಡ್ತಿಯ ಇತ್ಯಾದಿ ಇತ್ಯಾದಿಗಳನ್ನು ಬೈದು ಸುಮ್ಮನಾದಳು.
ಒಂದೊಂದು ಕುರಿಗೆ ಇಬ್ಬಿಬ್ಬರು ಸೇರಿಕೊಂಡು ಮನೆ ಕಡೆಗೆ ಸಾಗಿಸಿದ್ರು.

ಕರಿಯಪ್ಪನಹಳ್ಳಿಯ ಮಂಜಣ್ಣ ಇಟ್ಟಿಗೆ ಗೂಡಿನಲ್ಲಿ ಕೆಲಸ ಮಾಡುತ್ತಿದ್ದ ತಮಿಳು ವಡ್ಡರಿಗೆ ವಿಷಯ ತಿಳಿದು ನೇರವಾಗಿ ಮಾರನ ಬಳಿ ಬಂದರು, ನಾಯಿಗಳ ಹಾವಳಿಯ ಬಗ್ಗೆ ದುಃಖ ಸೂಚಿಸಿ, ಜೋಡಿ ನಳಿಗೆ ಗನ್ನಿನ ಮರಿಗನಿಗೇಳಿ ನಾಯಿಗಳನ್ನು ಸುಡಿಸಬೇಕೆಂದು ಸಲಹೆ ಸೂಚನೆಗಳನ್ನು ಕೊಟ್ಟು ವ್ಯಾಪಾರಕ್ಕಿಳಿದರು,
ಎಷ್ಟೇಳ್ತಿಯ ಮಾರ? ಎಂದು
ಕೊನೆಮನೆ ರಾಮಚಾರಿಯು ದಳ್ಳಾಳಿಯಾಗಿ ನಿಂತ. ಅರ್ಧ ಗಂಟೆಗಳಕಾಲ ನೆಡೆದ ಚೌಕಾಸಿ ವ್ಯಾಪಾರದ ಮುಖ್ಯ ಅಂಶಗಳು ಇವು. ಮೊದಲನೆಯದಾಗಿ ನಾಯಿ ಕಚ್ಚಿಸಾಯಿಸಿರುವುದರಿಂದ ನಾಯಿಯ ಹಲ್ಲಿನ ವಿಷ ಕುರಿಬಾಡಿಗೂ ಸೇರಿರಬಹುದು. ಇಂತಹ ಬಾಡನ್ನು ಕೊಳ್ಳುವ ಹಾಗೂ ತಿನ್ನುವ ರಿಸ್ಕ್ ತೆಗೆದುಕೊಳ್ಳುತ್ತಿರುವುದರಿಂದ ಕಡಿಮೆಗೆ ಕೊಡಬೇಕೆಂದು ವಡ್ಡರ ವಾದವಾದರೆ, ಮೊನ್ನೆತಾನೆ ಸತರ್‌ಸಬ್ ದಿಣ್ಣೆಯ ಸಾಬಿಯು ಹದಿನೈದು ಸಾವಿರಕ್ಕೆ ವ್ಯಾಪಾರ ಮಾಡಿ ಬಿಟ್ಟಿ ಹೋಗಿದ್ದರು, ಸಾರಾಸಗಟಾಗಿ ನಾಲ್ಕು ಕೊಬ್ಬಿದ ಕುರಿಗಳಿಗೆ ತಲಾ ಎರಡೆರಡು ಸಾವಿರದಂತೆ ಒಟ್ಟು ಎಂಟು ಸಾವಿರಕ್ಕೆ ವ್ಯಾಪಾರ ಮಾಡಿ, ಮಾರನನ್ನು ಒಪ್ಪಿಸುವಷ್ಟರಲ್ಲಿ ಆಚಾರಿಗೆ ಮೂರ್ನಾಲ್ಕು ಬಿಡಿಗಳು ಖರ್ಚಾದವು, ಉಳಿದ ಒಂದು ಕುರಿಯನ್ನು ಮಾರ ಮತ್ತು ಕುಟುಂಬದವರು ಸೇರಿ ಹಬ್ಬ ಮಾಡಿದರು.

ಈರಿ ಊಟ ಉಣಬೇಕಾದರೆ ಮಾರನ ಮುಖನೋಡುತ್ತಾ, ಹೋಳ್ಳ. . . . ದಿನಾ ಹಿಂಗೆ ಒಂದೊಂದು ಕುರಿನ ನಾಯಿಗಳ ಬಾಯಿಗೆ ಕೊಡುತ್ತಿದ್ದರೆ, ಇಂಗೆ ರುಚಿ ರುಚಿಯಾಗಿ ಬಾಡು ತಿನ್ನಬಹುದು. ಎಂದು ಪರೋಕ್ಷವಾಗಿ ಬಯ್ಗುಳದ ಚುಚ್ಚುಮಾತಿನ ಮಳೆಗೆರೆಯ ತೊಡಗಿದಳು ಈರಿ.

# ಸಂಕ್ರಮಣ



ಸಂಕ್ರಮಣವಿಂದು
ಹೊಸ ಸಂಕ್ರಮಣವಿಂದು

ಪ್ರಕೃತಿಯ ಮಡಿಲ್ಗೆ
ಹೊಸ ಸೊಗಸುತಂದ ಸಂಕ್ರಮಣ
ಸುಗ್ಗಿ ಕಾಲದಲಿ ಹಿಗ್ಗಿ ಕುಣಿವ
ಅನ್ನಧಾತನ ನೆಚ್ಚಿನ ಸಂಕ್ರಮಣ

ಹೊಸ ಬೆಳಕ ಚೆಲ್ಲಿ
ಹೊಸ ಋತುವ ತರುವ
ನಯನ ಮೋಹಕ ಚಿತ್ತಾರ ಬಿಡಿಸುವ
ಪ್ರಕೃತಿ ಮಾತೆಯ ರಮ್ಯಕಾಲ

ಹೊಸ ಬಗೆ ವಿಶಿಷ್ಠ ಅಚರಣೆಯ
ನವ ಚೈತನ್ಯವೀ ಸಂಕ್ರಮಣ
ಸಕಲ ಸಂಕುಲಕ್ಕೂ ಹೊಸ ಚಿಗುರ
ಉಣಬಡಿಪ ಸಂಪನ್ನವೀ ವಸಂತಕಾಲ

ಎಲ್ಲರೆದೆಯ ಆಸೆ ಕನಸ
ಪೂರೈಸಿ ಮೇಲೈಸುವ
ಭಾವ ಪೂರ್ಣ ಬದುಕಿನ
ಚಿಲುಮೆಯಿದು ಸಂಕ್ರಮಣ.

– ಕೃಷ್ಣನಾಯಕ್
ವನ್ಯಜೀವಿಗಳ ಬಗ್ಗೆ ಪ್ರೀತಿಯಿರುವ ಇವರು
ಮದೇಶ್ವರ ರಕ್ಷಿತ ಅರಣ್ಯದ ಬಳಿ ರೇಷ್ಮೇ ಕೃಷಿ ಜೊತೆಗೆ
ಸಾಹಿತ್ಯ ಕೃಷಿಯಲ್ಲಿ ತೊಡಗಿರುವ
ವಿಜ್ಞಾನ ಪಧವೀಧರರು. -9611428901